


# ಜ್ಯೋತಿಷ ಮಿತ್ರ

ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1193 02-12-2021 ಗುರುವಾರ

ಪ್ಲವನಾಮ ಸಂವತ್ಸರ ದಕ್ಷಿಣಾಯಣ
ಶರತ್‌ಋತು ಕಾರ್ತಿಕಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ತ್ರಯೋದಶೀ (20:26)<br>ನಕ್ಷತ್ರ : ಸ್ವಾತೀ (16:26)<br>ರಾಹುಕಾಲ :<br>01:46 PM - 03:11 PM<br>ಗುಳಿಕಕಾಲ :<br>09:28 AM -10:53 AM | ಜ್ಞಾನಕ್ಕಿಂತಲೂ ಕಲ್ಪನಾಶಕ್ತಿ ದೊಡ್ಡದು. ಜ್ಞಾನಕ್ಕೆ ಸೀಮಿತ ಪರಿಧಿ ಇದೆ. ಕಲ್ಪನೆ ವಿಶ್ವವನ್ನೂ ಮೀರಿದ್ದು. |



# ಸಂಪಾದಕೀಯ

ದಿನಾಂಕ **04-12-2021**ರ ಶನಿವಾರದಂದು ಸೂರ್ಯಗ್ರಹಣ ಸಂಭವಿಸಲಿದೆ. ಇದು ಈ ವರ್ಷದ ಕೊನೆಯ ಸೂರ್ಯ ಗ್ರಹಣವಾಗಿರುತ್ತದೆ. ಭಾರತೀಯ ಕಾಲಮಾನದ ಪ್ರಕಾರ ಬೆಳಗ್ಗೆ **10.59**ಕ್ಕೆ ಪ್ರಾರಂಭವಾಗಿ ಮಧ್ಯಾಹ್ನ **03.07**ಕ್ಕೆ ಕೊನೆಗೊಳ್ಳುತ್ತದೆ. ಈ ಗ್ರಹಣವು ಅಂಟಾರ್ಟಿಕಾ, ದಕ್ಷಿಣ ಆಫ್ರಿಕಾ, ಆಸ್ಟ್ರೇಲಿಯಾ, ದಕ್ಷಿಣ ಅಮೆರಿಕಾದಲ್ಲಿ ಗೋಚರಿಸುತ್ತದೆ. ಭಾರತದಲ್ಲಿ ಗೋಚರಿಸುವುದಿಲ್ಲವಾದ ಕಾರಣ ಗ್ರಹಣ ಸಂಬಂಧವಾದ ಯಾವುದೇ ಧಾರ್ಮಿಕ ಆಚಣೆ ಮಾಡುವ ಅವಶ್ಯಕತೆ ಇರುವುದಿಲ್ಲ.

ಗ್ರಹಣವು ವೃಶ್ಚಿಕ ರಾಶಿಯಲ್ಲಿ ಸಂಭವಿಸುತ್ತದೆ.

ಗ್ರಹಣ ಸಂಭವಿಸುವಾಗ ವೃಶ್ಚಿಕರಾಶಿಯಲ್ಲಿ ರವಿ, ಚಂದ್ರ, ಬುಧ, ಕೇತು, ಮಾಂದಿ ಗ್ರಹರಿರುತ್ತಾರೆ. ವೃಶ್ಚಿಕವು ಕೀಟರಾಶಿ, ಜಲರಾಶಿ. ಕಾಲಪುರುಷನ ಅಷ್ಟಮ ರಾಶಿಯಾಗಿರುತ್ತದೆ. ಅಷ್ಟಮ ಸ್ಥಾನವು ಮರಣ, ಅನಾರೋಗ್ಯ, ವಾಮಮಾರ್ಗ, ಬಂಧನ ಇತ್ಯಾದಿಗಳನ್ನು ಸೂಚಿಸುತ್ತದೆ.

| | | | |
|---|---|---|---|
| | | ರಾಹು | |
| ಗುರು | | | |
| ಶನಿ | | | |
| ಶುಕ್ರ | ರವಿ ಚಂದ್ರ ಬುಧ ಕೇತು ಮಾಂದಿ | ಕುಜ | |

**ಗ್ರಹಣದ ಫಲಾಫಲ :** ಜಲದುರಂತಗಳು ಹೆಚ್ಚಾಗುವುದು. ಕ್ರಿಮಿ-ಕೀಟಗಳಿಂದ ಉಂಟಾಗುವ ರೋಗ ಪ್ರಕರಣಗಳ

ಸಂಖ್ಯೆ ಹೆಚ್ಚಾಗುವುದು. ಭೂಗತ ಚಟುವಟಿಕೆಗಳು-ಭಯೋತ್ಪಾದಕ ಕೃತ್ಯಗಳು ವಿಪರೀತವಾಗುವುದು. ರಾಜಕೀಯ ಪಕ್ಷಗಳಿಗೆ - ರಾಜಕಾರಣಿಗಳಿಗೆ ತೊಂದರೆಯಾಗುವುದು. ಲಂಚ ಸ್ವೀಕರಿಸಿ ಜೈಲು ಸೇರುವವರ ಸಂಖ್ಯೆಯೂ ಹೆಚ್ಚಾಗುವುದು. ಮೇಷ, ವೃಷಭ, ಕರ್ಕಾಟಕ, ಸಿಂಹ ಮತ್ತು ವೃಶ್ಚಿಕ ರಾಶಿಯವರು ಆದಷ್ಟು ಎಚ್ಚರದಿಂದಿರಬೇಕು.

-ಶ್ರೀಷ ಎಸ್. (ಸಂಪಾದಕರು)



# ಮಾನಸಿಕ ನೆಮ್ಮದಿಗಾಗಿ

# ಕ್ಷೇಪನಾ ಮುದ್ರೆ

**ಮಾಡುವ ವಿಧಾನ :** ಎರಡು ಹಸ್ತದ ಬೆರಳುಗಳನ್ನು ಒಂದಕ್ಕೆ ಒಂದಕ್ಕೆ ಒಂದು ಸೇರಿಸಿ ಎರಡೂ ಕೈಗಳ ತೋರ್ ಬೆರಳನ್ನು ನೇರವಾಗಿ ಒಂದಕ್ಕೊಂದು ತಾಗಿಸಬೇಕು. ಎರಡು ಹಸ್ತದ ಮಧ್ಯದಲ್ಲಿ ಸ್ವಲ್ಪ ಜಾಗವಿರಬೇಕು ಮತ್ತು ತೋರುಬೆರಳು ಭೂಮಿಯ ಕಡೆ ವಾಲಿರಬೇಕು.

**ಸಮಯ :** ಹತ್ತರಿಂದ ಹದಿನೈದು ನಿಮಿಷ.

**ಪ್ರಯೋಜನಗಳು :**

1. ಅಲರ್ಜಿ, ಚರ್ಮ ಸಂಬಂಧ ದೋಷಗಳು ನಿವಾರಣೆ ಆಗುತ್ತದೆ.

2. ಒತ್ತಡ, ಟೆನ್ಷನ್ ದೂರವಾಗಿ ಮನಸ್ಸು ಶಾಂತವಾಗುತ್ತದೆ.

3. ನಕರಾತ್ಮಕ ಆಲೋಚನೆಗಳು, ಋಣಾತ್ಮಕ ಶಕ್ತಿಯನ್ನು ದೂರ ಮಾಡುತ್ತದೆ.





# ನವಾಂಶ ವಿಚಾರ

ಚಂದ್ರ ನಿಂತ ನವಾಂಶದಿಂದ 36ನೇ ನವಾಂಶವನ್ನು "ಕರ್ಮಾಂಭ", ಚಂದ್ರ ನಿಂತ ನವಾಂಶದಿಂದ 64ನೇ ನವಾಂಶವನ್ನು "ಸಂಘಟಿಕ", ಚಂದ್ರ ನಿಂತ ನವಾಂಶದಿಂದ 72ನೇ ನವಾಂಶವನ್ನು "ವೈನಸಿಕಾ", ಚಂದ್ರ ನಿಂತ ನವಾಂಶದಿಂದ 96ನೇ ನವಾಂಶವನ್ನು "ಮನಸ" ಎಂದು ಕರೆಯುತ್ತಾರೆ.

ಪಾಪಗ್ರಹಗಳು ತನ್ನ ಗೋಚಾರ ಸಂಚಾರ ಕಾಲದಲ್ಲಿ ಈ ನಾಲ್ಕು ನವಾಂಶಗಳ ಮೇಲೆ ಸಂಚರಿಸುವಾಗ ಆ ಜಾತಕರು ಮಾನಸಿಕ ಸಮತೋಲನವನ್ನು ಕಳೆದುಕೊಳ್ಳುತ್ತಾರೆ.

| | | | |
|---|---|---|---|
| | | | ಕೇತು |
| | ಸ್ತ್ರೀ ಕುಂಡಲಿ | | |
| ಚಂದ್ರ<br>ಶನಿ | 07-01-1992<br>1.54AM | | ವ.ಗುರು |
| ರವಿ ರಾಹು<br>ಕುಜ | ಶುಕ್ರ | ಲಗ್ನ | |

ಇದು ಸ್ತ್ರೀ ಜಾತಕವಾಗಿದ್ದು, ಜನ್ಮರಾಶಿ ಮಕರ, ಜನ್ಮ ನಕ್ಷತ್ರ ಶ್ರವಣ ಒಂದನೇ ಪಾದ. 2011 ಡಿಸೆಂಬರ್ 9ರಂದು ಕುಜ ಈ ಜನ್ಮ ಚಂದ್ರನಿಗೆ 96ನೇ ನವಾಂಶದಲ್ಲಿ ಅಂದರೆ

ವೃಶ್ಚಿಕ ರಾಶಿಯಲ್ಲಿರುವ ಜ್ಯೇಷ್ಠಾ ನಕ್ಷತ್ರದ ನಾಲ್ಕನೇ ಪಾದದಲ್ಲಿ ಸಂಚರಿಸುವಾಗ ಇವರು ಮಾನಸಿಕವಾಗಿ ಬಹಳ ನೊಂದು ಆತ್ಮಹತ್ಯೆ ಮಾಡಿಕೊಂಡರು.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com